# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 1259 |
| **ಸದಸ್ಯರ ಹೆಸರು** | ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| **ಉತ್ತರಿಸಬೇಕಾದ ದಿನಾಂಕ** | 17.03.2021 |
| **ಉತ್ತರಿಸುವ ಸಚಿವರು** | ಕಂದಾಯ ಸಚಿವರು |

| ಕ್ರ. | ಪ್ರಶ್ನೆ | ಉತ್ತರ |
|---|---|---|
| ಅ) | ಕಂದಾಯ ಇಲಾಖೆಯಿಂದ ರೈತರಿಗೆ ಮಂಜೂರಾದ ಜಮೀನುಗಳನ್ನು ದುರಸ್ತು ಮಾಡುವ ಪ್ರಕ್ರಿಯೆ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ವ್ಯಕ್ತಿ ದುರಸ್ತು ಮಾಡಲು ಅರ್ಜಿ ಪಡೆದು ಮೂರ್ನಾಲ್ಕು ವರ್ಷಗಳಾದರೂ 1 ರಿಂದ 5, 6 ರಿಂದ 11 ಹಾಗೂ 11ಇ ಪ್ರಕ್ರಿಯೆ ಪೂರ್ಣವಾಗದೆ ರೈತರು ಕಂಗಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕು ರಾಗಿಬೊಮ್ಮನಹಳ್ಳಿ ಸರ್ವೆ ನಂ. 267 ರಲ್ಲಿ 1.13.00 ಗುಂಟೆ ದುರಸ್ತಿಗಾಗಿ ಅರ್ಜಿ ಸಲ್ಲಿಸಿ 3 ವರ್ಷಗಳಾದರೂ ಪ್ರಕ್ರಿಯೆ ಪೂರ್ಣವಾಗಿರುವುದಿಲ್ಲ ಕಾರಣಗಳೇನು; | ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕು ರಾಗಿ ಬೊಮ್ಮನಹಳ್ಳಿ ಸರ್ವೆ ನಂ. 267 ರಲ್ಲಿಯ ಪೋಡಿ ದುರಸ್ತಿಗಾಗಿ ಭೂಮಾಪನ ಶಾಖೆಗೆ ಯಾವುದೇ ಪ್ರಕರಣ ಸ್ವೀಕೃತವಾಗಿರುವುದಿಲ್ಲ. ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು ಇವರ ಮಾಹಿತಿಯನ್ವಯ ಪ್ರಕರಣದಲ್ಲಿ ನಿಯಮಾನುಸಾರ ನಮೂನೆ 1 ರಿಂದ 5ನ್ನು ಭರ್ತಿ ಮಾಡಿ ಮೇಲು ಸಹಿಗಾಗಿ ಉಪವಿಭಾಗಾಧಿಕಾರಿಗಳಿಗೆ ಸಲ್ಲಿಸಲಾಗಿತ್ತು. ಪ್ರಕರಣದಲ್ಲಿ ಕೆಲವು ನ್ಯೂನ್ಯತೆ ಗಳಿರುವುದರಿಂದ ಅದನ್ನು ಸರಿಪಡಿಸಿ ಸಲ್ಲಿಸಲು ತಿಳಿಸಲಾಗಿರುತ್ತದೆ. |
| ಈ) | ಇತ್ತೀಚೆಗೆ ದುರಸ್ತು ಪ್ರಕ್ರಿಯೆಯನ್ನು ಆನ್‌ಲೈನ್ ಮಾಡಿದ್ದು ಈ ಬಗ್ಗೆ ಕಂದಾಯ ಅಧಿಕಾರಿಗಳಿಗೆ ಸೂಕ್ತ ತರಬೇತಿ ಇಲ್ಲದೆ ವಿಳಂಬವಾಗುತ್ತಿದೆ; ಈ ಬಗ್ಗೆ ತರಬೇತಿ ನೀಡಲು ಏನು ಕ್ರಮವಹಿಸಲಾಗುತ್ತದೆ; (ವಿವರ ಒದಗಿಸುವುದು) | ಪೋಡಿ ದುರಸ್ತಿ ಕಾರ್ಯವನ್ನು ಆನ್‌ಲೈನ್ ಮೂಲಕ ನಿರ್ವಹಿಸುವ ಕುರಿತು ಆಯುಕ್ತರು ಭೂಮಿ ಉಸ್ತುವಾರಿ ಕೋಶ ಬೆಂಗಳೂರು ಇವರ ಪತ್ರ ಸಂಖ್ಯೆ: ಬಿಎಂಸಿ/ ಸಿಎಜಿ/01/2019-20 ದಿನಾಂಕ:6-6-2020 ಮತ್ತು ಸರ್ಕಾರದ ಪತ್ರ ಸಂಖ್ಯೆ ಕಂಇ 88 ಎಲ್‌ಜಿಪಿ 2018 ದಿನಾಂಕ:07-07-2020 ರಲ್ಲಿ ಸೂಚಿಸಿರುವಂತೆ ನಮೂನೆ 1 ರಿಂದ 5 ಮಾಹಿತಿಯನ್ನು ಡಿಜಿಟೈಜ್ ಮಾಡಲು ತಂತ್ರಾಂಶ ಅಭಿವೃದ್ಧಿಪಡಿಸಿದ್ದು, ಸದರಿ ತಂತ್ರಾಂಶದಲ್ಲಿ ಡಾಟಾ ಎಂಟ್ರಿ ಮಾಡಲು ಬಾಕಿ ಇರುತ್ತದೆ. ತಂತ್ರಾಂಶದ ಕುರಿತು ಸಿಬ್ಬಂದಿ/ಅಧಿಕಾರಿ ಗಳಿಗೆ ಸೂಕ್ತ ತರಬೇತಿ ಮತ್ತು ಮಾರ್ಗದರ್ಶನ ನೀಡಲಾಗಿದೆ. |
| ಉ) | ಒಟ್ಟಾರೆ ಈ ಪ್ರಕ್ರಿಯೆಯನ್ನು ತ್ವರಿತ ವಾಗಿ ಪೂರ್ಣಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | |

**ಸಂಖ್ಯೆ: ಕಂಇ 43 ಎಸ್‌ಎಸ್‌ಸಿ 2021**

**(ಆರ್. ಅಶೋಕ)**
ಕಂದಾಯ ಸಚಿವರು